# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯ Volume 149 | ಬೆಂಗಳೂರು, ಗುರುವಾರ, ನವೆಂಬರ್ ೬, ೨೦೧೪ (ಕಾರ್ತೀಕ ೧೫, ಶಕ ವರ್ಷ ೧೯೩೬) Bangalore, Thursday, November 6, 2014 (Karthika 15, Shaka Varsha 1936) | ಸಂಚಿಕೆ ೪೪ Issue 44 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾಧಿಕಾರಿಯವರ ಕಾರ್ಯಾಲಯ, ಕಂದಾಯ ಭವನ, ರಾಮನಗರ ಜಿಲ್ಲೆ, ರಾಮನಗರ

### ಅಧಿಕೃತ ಜ್ಞಾಪನ ಪತ್ರ

**ನಂ.ರಾಜಿಕಾ:ಸಿಬ್ಬಂದಿ/ಸಿಆರ್/29/12-13 ದಿನಾಂಕ:17-09-2014.**

**ವಿಷಯ:** ರಾಮನಗರ ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

**ಉಲ್ಲೇಖ:**
1. ಸರ್ಕಾರದ ಪತ್ರ ಸಂ:ಕಂಇ/04/ಬಿಎಸ್‌ಸಿ/2011, ದಿನಾಂಕ:25-02-2011.
2. ಸರ್ಕಾರದ ಅ.ಸ.ಪ.ಸಂ:ಕಂಇ/33/ಡಿಎಸ್‌ಪಿ/2012, ದಿನಾಂಕ:05-06-2012.
3. ಸರ್ಕಾರದ ಅ.ಸ.ಪ.ಸಂ:ಕಂಇ/33/ಡಿಎಸ್‌ಪಿ/2012, ದಿನಾಂಕ:21-06-2012.
4. ಈ ಕಛೇರಿ ಅ.ಸೂ.ಸಂಖ್ಯೆ:ರಾಜಿಕ/ಸಿಬ್ಬಂದಿ/ಸಿಆರ್/29/12-13, ದಿನಾಂಕ: 24-08-2012.
5. ಈ ಕಛೇರಿಯಲ್ಲಿ ದಿನಾಂಕ:15-07-2014ರಂದು ನಡೆದ ಕೌನ್ಸಿಂಗ್ ನಡವಳಿ.

*****

ರಾಮನಗರ ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ವೃತ್ತಗಳಲ್ಲಿ ಹಾಗೂ ಹೊಸದಾಗಿ ಸೃಜಿಸಿರುವ ನಾಡ ಕಛೇರಿಗಳಿಗೆ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಉಲ್ಲೇಖ (1),(2),(3),(4) ಮತ್ತು (5)ರನ್ವಯ ಈ ಕೆಳಕಾಣಿಸಿದ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣ ಪತ್ರಗಳನ್ನು ಕಾಯ್ದಿರಿಸಿ ವೇತನ ಶ್ರೇಣಿ 11600-200-12000-250-13000-300-14200-350-15600-400-17200-450-19000-500-21000ದಲ್ಲಿ ನೇರ ನೇಮಕಾತಿಯ ಮುಖಾಂತರ ನೇಮಕ ಮಾಡಿ ಅವರ ಹೆಸರಿನ ಮುಂದೆ ನಮೂದಿಸಿರುವ ತಾಲ್ಲೂಕುಗಳಿಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರ ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ ವಿಳಾಸ |
|---|---|---|---|
| 1 | ಎಸ್.ಆರ್. ರಾಜೇಶ್ ಬಿನ್ ರಾಮಚಂದ್ರ ಎಸ್.ವಿ. ದಾಸರೀ ಬೀದಿ, ಸರ್ಜಾಪುರ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ-562125 | ಇಗ್ಗಲೂರು ವೃತ್ತ, ವಿರೂಪಾಕ್ಷಿಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ. | ತಾಲ್ಲೂಕು ಕಛೇರಿ, ಚನ್ನಪಟ್ಟಣ, ರಾಮನಗರ ಜಿಲ್ಲೆ. |
| 2 | ಅಭಿಷೇಕ್ ಹೆಚ್.ಡಿ. ಬಿನ್ ದೇವೇಗೌಡ ಹೊಸಳ್ಳಿ, ಆತಗೂರು ಪೋಸ್ಟ್ ಮತ್ತು ಅಂಚೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ-571428 | ಹೊಂಗನೂರು ವೃತ್ತ, ಕಸಬಾ ಹೋಬಳಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ. | ತಾಲ್ಲೂಕು ಕಛೇರಿ, ಚನ್ನಪಟ್ಟಣ, ರಾಮನಗರ ಜಿಲ್ಲೆ. |
| 3 | ಸುಷ್ಮಾ ಪಿ. ಬಿನ್ ಪುಟ್ಟಸ್ವಾಮಿ ಡಿ. ಚಕ್ಕನಕೆರೆ, ದುಡನಹಳ್ಳಿ ಪೋಸ್ಟ್, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ-571429 | ನಾಡಕಛೇರಿ ಕೈಲಾಂಚ, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ. | ತಾಲ್ಲೂಕು ಕಛೇರಿ, ರಾಮನಗರ, ರಾಮನಗರ ಜಿಲ್ಲೆ. |

| ಕ್ರ ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ ವಿಳಾಸ |
|---|---|---|---|
| 4 | ಚಂದ್ರ ಮೋಹನ್ ಜೆ. ಬಿನ್ ಜನಾರ್ಧನ್ ನಂ.228, ರಾಜೀವ್ ಗಾಂಧಿ ಕಾಲೋನಿ 2ನೇ ಸ್ಟೇಜ್, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ–5621203 | ನಾಡಕಛೇರಿ ಸೋಲೂರು, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಮಾಗಡಿ, ರಾಮನಗರ ಜಿಲ್ಲೆ. |
| 5 | ವಿಶ್ವನಾಥ್ ಸಿ. ಬಿನ್ ಲಾಲಪ್ಪ ಜಂಗಿರಾಂಪುರ ತಾಂಡ, ರೋಡಲಬಂದ ಕ್ಯಾಂಪ್ ಪೋಸ್ಟ್ ಲಿಂಗಸೂರು ತಾಲ್ಲೂಕು, ರಾಯಚೂರು–584127 | ನಾಡಕಛೇರಿ ಉಯ್ಯಂಬಳ್ಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಕನಕಪುರ, ರಾಮನಗರ ಜಿಲ್ಲೆ. |
| 6 | ಪ್ರಭಾಕರ ಬಿನ್ ನಿಂಗಣ್ಣ ಮಲ್ಲನಾಯಕನಕಟ್ಟೆ, ಗಾಣದಾಳು ಪೋಸ್ಟ್, ದುದ್ದ ಹೋಬಳಿ, ಮಂಡ್ಯ, ಮಂಡ್ಯ ಜಿಲ್ಲೆ–571405 | ಅಕ್ಕೂರು ಹೊಸಹಳ್ಳಿ ವೃತ್ತ, ವಿರೂಪಾಕ್ಷಿಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ. | ತಾಲ್ಲೂಕು ಕಛೇರಿ, ಚನ್ನಪಟ್ಟಣ, ರಾಮನಗರ ಜಿಲ್ಲೆ. |
| 7 | ಅಶೋಕ್ ಲಮಾಣಿ ಬಿನ್ ಲೋಕಪ್ಪ ಆಲೂರು, ಎಲ್.ಟಿ.ಪೋಸ್ಟ್, ಗುಲ್‌ಬಾಳ್, ತಾಲ್ಲೂಕು, ಬಾಗಲಕೋಟೆ ಜಿಲ್ಲೆ–58207 | ನಾಡಕಛೇರಿ ಹಾರೋಹಳ್ಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಕನಕಪುರ, ರಾಮನಗರ ಜಿಲ್ಲೆ. |
| 8 | ಡಿ. ಕುಮಾರಸ್ವಾಮಿ ಬಿನ್ ಡಾಕಪ್ಪ ವೈ.ಎಂ. ಸಪ್ತಗಿರಿ ನಿವಾಸ, 10ನೇ ಕ್ರಾಸ್, 60ಫೀಟ್ ರೋಡ್, ವಿನೋಭನಗರ, ಶಿವಮೊಗ್ಗ ಜಿಲ್ಲೆ–577204 | ಚಿಕ್ಕಸೋಲೂರು ವೃತ್ತ ಸೋಲೂರು ಹೋಬಳಿ ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಮಾಗಡಿ, ರಾಮನಗರ ಜಿಲ್ಲೆ. |
| 9 | ಮೈಬೂಬಸಾಬ ನದಾಫ ಬಿನ್ ಅಬರಂಗ ಸಾಬ್ ನದಾಫ ಕುಮಸಗಿ ಗ್ರಾಮ ಮತ್ತು ಪೋಸ್ಟ್, ಸಿಂಧಗಿ ತಾಲ್ಲೂಕು, ಬಿಜಾಪುರ ಜಿಲ್ಲೆ–586206 | ಮೆಣಸಿಗನಹಳ್ಳಿ ವೃತ್ತ, ವಿರೂಪಾಕ್ಷಿಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ. | ತಾಲ್ಲೂಕು ಕಛೇರಿ, ಚನ್ನಪಟ್ಟಣ, ರಾಮನಗರ ಜಿಲ್ಲೆ. |
| 10 | ಕೇಶವ ಜಿ.ಕೆ ಬಿನ್ ಕೃಷ್ಣಮೂರ್ತಿ ಜಿ.ಕೆ. ಗಂಡಸಿ, ವಿನಾಯಕನಗರ ಹೊಸಬಸ್ ನಿಲ್ದಾಣ ಹಿಂಭಾಗ, ಅರಸೀಕೆರೆ, ಹಾಸನ ಜಿಲ್ಲೆ | ನಾಡಕಛೇರಿ ಮಾಡಬಾಳ್, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಮಾಗಡಿ, ರಾಮನಗರ ಜಿಲ್ಲೆ. |
| 11 | ಗಾಯತ್ರಿ ಪೂರ್ತಗೇರಿ ಬಿನ್ ಬಸವಂತಪ್ಪ ಪೂರ್ತಗೇರಿ ಕೇರಾಫ್ ಪಿ.ಬಿ. ಪೂರ್ತಗೇರಿ ಕೃಷ್ಣ, ಹುಡ್ಕೋ ಕಾಲೋನಿ, ಹುಲ್‌ಕೋಟಿ ತಾಲ್ಲೂಕು, ಗದಗ್ ಜಿಲ್ಲೆ–582205 | ತಿಗಳರಹಳ್ಳಿ ವೃತ್ತ, ಕಸಬಾ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಕನಕಪುರ, ರಾಮನಗರ ಜಿಲ್ಲೆ. |
| 12 | ದಸ್ತಗೀರ ಜಾಲಗೇರಿ ಎಂ ಬಿನ್ ಮೈಬೂಬಾ ಜಾಲಗೇರಿ ಕಲಬಿಳಗಿ ಪೋಸ್ಟ್, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ–587330 | ನಾಡಕಛೇರಿ ಕೋಡಿಹಳ್ಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, | ತಾಲ್ಲೂಕು ಕಛೇರಿ, ಕನಕಪುರ, ರಾಮನಗರ ಜಿಲ್ಲೆ. |

**ಷರತ್ತುಗಳು:**

01. ನೇಮಕವಾದ ಅಭ್ಯರ್ಥಿಗಳು ಈ ಆದೇಶದ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರುವ ತಾಲ್ಲೂಕು ತಹಶೀಲ್ದಾರ್ ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

02. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ, ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವುಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಕರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.

03. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1) ಅಕೌಂಟ್ಸ್ ಲೋಯರ್ (2) ರಿವಿನ್ಯೂ ಲೋಯರ್

(3)ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು.) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ಕರ್ನಾಟಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ತೆಗೆದು ಹಾಕಲಾಗುವುದು.

04. ನೇರ ನೇಮಕಾತಿ ಮುಖಾಂತರ ಆಯ್ಕೆಯಾದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 59 ಸೇವೆನೆ 2012 ದಿನಾಂಕ: 06-08-2012ರಂತೆ ಸರ್ಕಾರ ನಿಗದಿಪಡಿಸಿದ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಅವರ ಪರಿವೀಕ್ಷಣಾ ಅವಧಿಯಲ್ಲಿ ಸರ್ಕಾರ/ ಸರ್ಕಾರದಿಂದ ಅನುಮೋದಿಸಲ್ಪಟ್ಟ ಸಂಸ್ಥೆಯಲ್ಲಿ ನಡೆಸಿದ ಪರೀಕ್ಷೆಯಲ್ಲಿ ಶೇ.60 ಅಂಕಗಳಿಗೆ ಕಡಿಮೆ ಇರದಂತೆ ಪಾಸು ಮಾಡತಕ್ಕದ್ದು.

05. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ, ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದು ಹಾಕಲಾಗುವುದು.

06. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ **"ನಿಷ್ಠೆಯ ಪ್ರಮಾಣ ವಚನ"** ಸ್ವೀಕರಿಸತಕ್ಕದ್ದು.

07. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.

08. ಸರ್ಕಾರದ ಸುತ್ತೋಲೆ ಸಂ.ಕಂಇ 54 ಬಿಎಸ್‌ಸಿ 2007 ದಿನಾಂಕ:27.03.2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ರಾಮನಗರ ಜಿಲ್ಲೆಯಲ್ಲಿ ಕನಿಷ್ಟ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

09. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂದ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.

10. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರಿಕ ಸೇವಾ(ಸಿಸಿಎ)ನಿಯಮಾವಳಿ 1957 ಕರ್ನಾಟಕ ನಾಗರೀಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

11. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.

12. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000-00 (ರೂಪಾಯಿಗಳು ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಶೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು. ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

13. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

14. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

15. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ-ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗದಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

16. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

17. ಅಭ್ಯರ್ಥಿಗಳು ನೇಮಕ ಮಾಡುವ ಸ್ಥಳಗಳಲ್ಲಿ ಕಡ್ಡಾಯವಾಗಿ ವಾಸವಿರತಕ್ಕದ್ದು.

18. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆದೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಶೀಲ್ದಾರ್‌ರವರಿಗೆ ಸೂಚಿಸಿದೆ.

ಜಿಲ್ಲಾಧಿಕಾರಿಗಳು,
ರಾಮನಗರ ಜಿಲ್ಲೆ.

## ರಾಮನಗರ ಜಿಲ್ಲೆ ಗ್ರಾಮ ಲೆಕ್ಕಿಗರ ನೇರ ನೇಮಕಾತಿಯ ಅಂತಿಮ ಆಯ್ಕೆ ಪಟ್ಟಿ ದಿನಾಂಕ: 02-09-2014

### ಅಧಿಸೂಚನೆ ಸಂಖ್ಯೆ: ರಾಜಿಕಾ/ಗ್ರಾಲೆ/ಸಿಬ್ಬಂದಿ/ಸಿಆರ್/29/2012-13 ದಿನಾಂಕ: 02-09-2014

**ವಿಷಯ:-** ರಾಮನಗರ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗೆ ನೇರ ನೇಮಕಾತಿ ಮಾಡುವ ಬಗ್ಗೆ.

**ಉಲ್ಲೇಖ:-** 1. ಕರ್ನಾಟಕ ಸರ್ಕಾರದ ಕಂದಾಯ ಇಲಾಖೆಯ ಅಧಿಸೂಚನೆ ಸಂಖ್ಯೆ: ಕಂಇ/ಬಿಎಸ್‌ಸಿ/2011 ದಿನಾಂಕ;25-02-2011.

2. ಈ ಕಛೇರಿಯ ಅಧಿಸೂಚನೆ ಸಂಖ್ಯೆ: ರಾಜಿಕಾ/ಗ್ರಾಲೆ/ಸಿಬ್ಬಂದಿ/ಸಿಆರ್/29/2012-13 ದಿನಾಂಕ: 28-08-2012.

3. ಈ ಕಛೇರಿಯಲ್ಲಿ ದಿನಾಂಕ: 15-07-2014 ರಂದು ನಡೆದ ಕೌನ್ಸಿಲಿಂಗ್ ನಡವಳಿ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ (1) (2) ಮತ್ತು (3) ರನ್ವಯ ರಾಮನಗರ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಹಾಗೂ ಹೊಸದಾಗಿ ಸೃಜಿಸಿರುವ 06 ನಾಡಕಛೇರಿಗಳಿಗೆ ಗ್ರಾಮ ಲೆಕ್ಕಿಗರ ಹುದ್ದೆಗೆ ನೇರ ನೇಮಕಾತಿ ಮೂಲಕ ಈ ಕೆಳಕಂಡ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಪ್ರತ್ಯೇಕವಾಗಿ ಆದೇಶದ ಪ್ರತಿಯನ್ನು ಕಳುಹಿಸಿಕೊಡಲಾಗುವುದು

| ಸಾಮಾನ್ಯ ಅಭ್ಯರ್ಥಿ | | | | | | | | | | |
|---|---|---|---|---|---|---|---|---|---|---|
| ಕ್ರ.ಸಂ | ಅಭ್ಯರ್ಥಿಯ ಹೆಸರು | ಪೋಷಕರ ಹೆಸರು | ವಿಳಾಸ | ಜನ್ಮ ದಿನಾಂಕ | ಲಿಂಗ | ಗಳಿಸಿದ ಅಂಕ | ಗರಿಷ್ಠ ಅಂಕ | ಶೇಕಡ ವಾರು | ಕೋರಿರುವ ಮೀಸಲಾತಿ | ರೋಷ್ಟರ್ ಮೀಸಲಾತಿ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಎಸ್.ಆರ್. ರಾಜೇಶ್ | ರಾಮಚಂದ್ರ ಎಸ್.ವಿ | ದಾಸರೀ ಬೀದಿ, ಸರ್ಜಾಪುರ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ-562125 | 7/1/1983 | ಪುರುಷ | 569 | 600 | 94.83 | GM | ಗ್ರಾ.ಅ |
| 2 | ಅಭಿಷೇಕ್ ಹೆಚ್.ಡಿ. | ದೇವೇಗೌಡ | ಹೊಸಳ್ಳಿ, ಆತಗೂರು ಪೋಸ್ಟ್ ಮತ್ತು ಅಂಚೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ-571428 | 5/1/1994 | ಪುರುಷ | 539 | 600 | 89.83 | GM | ಸಾ,ಅ |
| 3 | ಸುಷ್ಮಾ ಪಿ. | ಪುಟ್ಟಸ್ವಾಮಿ ಡಿ | ಚಿಕ್ಕನಕೆರೆ, ದುಂಡನಹಳ್ಳಿ ಪೋಸ್ಟ್, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ-571429 | 20/8/1994 | ಮಹಿಳೆ | 538 | 600 | 89.66 | GM | ಮ.ಅ |
| 4 | ಚಂದ್ರಮೋಹನ್ ಜೆ. | ಜನಾರ್ಧನ | ನಂ. 228, ರಾಜೀವ್ ಗಾಂಧಿ ಕಾಲೋನಿ 2ನೇ ಸ್ಟೇಜ್, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ 5621203 | 20/5/1990 | ಪುರುಷ | 532 | 600 | 88.66 | GM | ಸಾ.ಅ |
| 5 | ವಿಶ್ವನಾಥ್ ಸಿ. | ಲಾಲಪ್ಪ | ಜಂಗಿರಾಂಪುರ ತಾಂಡ, ರೋಡಲಬಂಡ ಕ್ಯಾಂಪ್ ಪೋಸ್ಟ್, ಲಿಂಗಸಗೂರು ತಾಲ್ಲೂಕು, ರಾಯಚೂರು-584127 | 1/6/1990 | ಪುರುಷ | 528 | 600 | 88 | GM | ಗ್ರಾ.ಅ |
| 6 | ಪ್ರಭಾಕರ | ನಿಂಗಣ್ಣ | ಮಲ್ಲನಾಯಕನಕಟ್ಟೆ, ಗಾಣದಾಳು ಪೋಸ್ಟ್, ದುದ್ದ ಹೋಬಳಿ, ಮಂಡ್ಯ, ಮಂಡ್ಯ ಜಿಲ್ಲೆ-571405 | 10/5/1976 | ಪುರುಷ | 344 | 600 | 57.33 | GM | ಮಾ. ಸೈ |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| **ಪರಿಶಿಷ್ಟ ಜಾತಿ ಅಭ್ಯರ್ಥಿಗಳು** | | | | | | | | | | |
| 1 | ಅಶೋಕ್ ಲಮಣಿ | ಲೋಕಪ್ಪ | ಆಲೂರು, ಎಲ್.ಟಿ. ಪೋಸ್ಟ್, ಗುಲ್‌ಬಾಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ–58207 | 1/6/1987 | ಪುರುಷ | 512 | 600 | 85.33 | SC | ಗ್ರಾ.ಅ |
| 2 | ಡಿ. ಕುಮಾರಸ್ವಾಮಿ | ಡಾಕಪ್ಪ ವೈ.ಎಂ. | ಸಪ್ತಗಿರಿ ನಿವಾಸ, 10ನೇ ಕ್ರಾಸ್, 60 ಫೀಟ್ ರೋಡ್, ವಿನೋಭನಗರ, ಶಿವಮೊಗ್ಗ–577204 | 2/12/1974 | ಪುರುಷ | 259 | 600 | 43.16 | SC | ಮಾ. ಸೈ |
| **ಪ್ರವರ್ಗ–1** | | | | | | | | | | |
| 1 | ಮೈಬೂಬಸಾಬ ನದಾಫ | ಅಬರಂಗ ಸಾಬ್ ನದಾಫ | ಕುಮಸಗಿ ಗ್ರಾಮ ಮತ್ತು ಪೋಸ್ಟ್, ಸಿಂಧಗಿ ತಾಲ್ಲೂಕು, ಬಿಜಾಪುರ ಜಿಲ್ಲೆ–586206 | 10/11/1992 | ಪುರುಷ | 528 | 600 | 88 | CAT-1/RURAL/KMS | ಗ್ರಾ.ಅ |
| **ಪ್ರವರ್ಗ–IIA** | | | | | | | | | | |
| 1 | ಕೇಶವ ಜಿ.ಕೆ | ಕೃಷ್ಣಮೂರ್ತಿ ಜಿ.ಕೆ. | ಗಂಡಸಿ, ವಿನಾಯಕನಗರ ಹೊಸಬಸ್ ನಿಲ್ದಾಣ ಹಿಂಭಾಗ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ–573119 | 5/11/1993 | ಪುರುಷ | 526 | 600 | 84.366 | 2A/RURAL/KMS | ಗ್ರಾ.ಅ |
| 2 | ಗಾಯತ್ರಿ ಪೂರ್ತಗೇರಿ | ಬಸವಂತಪ್ಪ ಪೂರ್ತಗೇರಿ | ಕೇರಾಫ್ ಪಿ.ಬಿ. ಪೂರ್ತಗೇರಿ ಕೃಷ್ಣ, ಹುಡ್ಕೋ ಕಾಲೋನಿ, ಹುಲ್‌ಕೋಟಿ ತಾಲ್ಲೂಕು, ಗದಗ್ ಜಿಲ್ಲೆ–582205 | 16/1/1990 | ಮಹಿಳೆ | 524 | 600 | 87.33 | 2A/RURAL | ಮ.ಅ |
| **ಪ್ರವರ್ಗ–IIB ಗ್ರಾಮೀಣ ಅಭ್ಯರ್ಥಿ** | | | | | | | | | | |
| 1 | ದಸ್ತಗೀರ ಜಾಲಗೇರಿ ಎಂ | ಮೈಬೂಬಾ ಜಾಲಗೇರಿ | ಕಲಬಿಳಗಿ ಪೋಸ್ಟ್, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ–587330 | 1/10/1990 | ಪುರುಷ | 520 | 600 | 86.66 | 2B/RURAL | ಗ್ರಾ.ಅ |

ಜಿಲ್ಲಾಧಿಕಾರಿಗಳು ಮತ್ತು ಅಧ್ಯಕ್ಷರು
ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರ
ರಾಮನಗರ ಜಿಲ್ಲೆ.

PR-118
SC-50

## ಕರ್ನಾಟಕ ಲೋಕಸೇವಾ ಆಯೋಗ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಇ(2)760/2014–15/ಪಿಎಸ್‌ಸಿ, ಬೆಂಗಳೂರು, ದಿನಾಂಕ: 22–09–2014**

**ಉಲ್ಲೇಖ:–** (1) ಅಧಿಸೂಚನೆ ಸಂಖ್ಯೆ: ಇ(2)870/2010–11/ಪಿಎಸ್‌ಸಿ, ದಿ: 18–03–2011.

(2) ಅಧಿಸೂಚನೆ ಸಂಖ್ಯೆ: ಇ(2)21/2011–12/ಪಿಎಸ್‌ಸಿ, ದಿ: 25–04–2011.

(3) ಅಧಿಸೂಚನೆ ಸಂಖ್ಯೆ: ಇ(2) 453/2013–14/ಪಿಎಸ್‌ಸಿ, ದಿ: 15–06–2013.

(4) ಅಧಿಸೂಚನೆ ಸಂಖ್ಯೆ: ಇ(2) 605/2013–14/ಪಿಎಸ್‌ಸಿ, ದಿ: 28–10–2013.

(5) ಅಧಿಸೂಚನೆ ಸಂಖ್ಯೆ: ಇ(2) 320/2014–15/ಪಿಎಸ್‌ಸಿ, ದಿ: 17–06–2014.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿನ 1350 ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳಿಗೆ, ಆಯೋಗವು ಉಲ್ಲೇಖ (1) ಮತ್ತು (2)ರಲ್ಲಿನ ಅಧಿಸೂಚನೆಗಳಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ಕರ್ನಾಟಕ ಸಾಮಾನ್ಯ ಸೇವೆಗಳು (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಸರ್ಕಾರದ ಶಾಖೆ) (ನೇಮಕಾತಿ) (ತಿದ್ದುಪಡಿ) ನಿಯಮಗಳು 2009ರನ್ವಯ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಿ, ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಅಂಕಗಳ ಆಧಾರದ ಮೇಲೆ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿ, ಆಯ್ಕೆಪಟ್ಟಿಗಳನ್ನು ಸಂಬಂಧಿತ ಜಿಲ್ಲಾ ಪಂಚಾಯತ್‌ನ ನೇಮಕಾತಿ ಪ್ರಾಧಿಕಾರಿಗಳಾದ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ನೇಮಕಾತಿಯ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿತ್ತು.

ತದನಂತರ ಅಂತಿಮ ಆಯ್ಕೆಪಟ್ಟಿಗೆ ಪೂರಕವಾಗಿ ಹೆಚ್ಚುವರಿ ಆಯ್ಕೆಪಟ್ಟಿಯನ್ನು ಉಲ್ಲೇಖ (5)ರ ಅಧಿಸೂಚನೆಯಲ್ಲಿ ದಿನಾಂಕ: 17–06–2014 ರಂದು ಪ್ರಕಟಿಸಿ ಸಂಬಂಧಿತ ಜಿಲ್ಲಾ ಪಂಚಾಯತ್‌ನ ನೇಮಕಾತಿ ಪ್ರಾಧಿಕಾರಿಗಳಾದ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ನೇಮಕಾತಿಯ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿತ್ತು.

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ರಾಮನಗರ ಜಿಲ್ಲೆಗೆ ಹೆಚ್ಚುವರಿ ಆಯ್ಕೆಪಟ್ಟಿಯಲ್ಲಿ ಹಂಚಿಕೆ ಮಾಡಲಾದ ಅಭ್ಯರ್ಥಿಗಳ ಪೈಕಿ, ಆಯ್ಕೆಪಟ್ಟಿಯ ಕ್ರಮ ಸಂಖ್ಯೆ 08ರಲ್ಲಿ ಸಾ.ಅ/ಪ್ರ–1/ಅಂ.ವಿ (ಶ್ರವಣದೋಷ) ಮೀಸಲಾತಿಯಡಿ ಆಯ್ಕೆಯಾಗಿದ್ದ ಶ್ರೀ ಸತೀಶ ಎಂ.ಪಿ. (ರಿ.ನಂ.505851) ಇವರು ಅಂಗವಿಕಲ ಮೀಸಲಾತಿಯನ್ನು ತಪ್ಪಾಗಿ ಕೋರಲಾಗಿದ್ದ ಕಾರಣ, ಇವರ ಸಾ.ಅ/ಪ್ರ–1/ಅಂ.ವಿ (ಶ್ರವಣದೋಷ) ಮೀಸಲಾತಿಯಡಿಯ ಆಯ್ಕೆಯನ್ನು ತೆರವಾದ ಸಾಮಾನ್ಯ/ಶ್ರವಣದೋಷ ಮೀಸಲಾತಿಯಡಿಯ ಹುದ್ದೆಗೆ ಈ ಕೆಳಕಂಡ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗಿದೆ.

| ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ | ಮೀಸಲಾತಿ | ಜನ್ಮ ದಿನಾಂಕ | ಗಳಿಸಿರುವ ಅಂಕಗಳು |
|---|---|---|---|
| ಶ್ರೀ ಹರ್ಷಗೌಡ ಬಿ.ಆರ್ [505911]<br>ಬಿನ್ ರಾಮಯ್ಯ.ಸಿ, #2320, 9ನೇ ಕ್ರಾಸ್,<br>ಕುವೆಂಪುನಗರ, ಚನ್ನಪಟ್ಟಣ ಟೌನ್,<br>ರಾಮನಗರ ಜಿಲ್ಲೆ–562160 | ಸಾ.ಅ./ಅಂ.ವಿ.<br>(ಶ್ರವಣದೋಷ) | 22–01–1989 | 35 |

ಇವರ ಜ್ಯೇಷ್ಠತೆಯನ್ನು ರಾಮನಗರ ಜಿಲ್ಲೆಯ ಕ್ರಮಸಂಖ್ಯೆ (7)ರ ಶ್ರೀ ಮಂಜುನಾಥ.ಡಿ (317736) ನಂತರ ಕ್ರಮ ಸಂಖ್ಯೆ (8)ರಲ್ಲಿ ನಿಗದಿಪಡಿಸಲಾಗಿದೆ.

**ಮನೋಜ್ ಕುಮಾರ್ ಮೀನಾ**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ

**PR. 99**
**SC. 30**

## ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–560 009

### ಅಧಿಸೂಚನೆ

**No. KAT/EST(1)/REC/DAL-WTN/45/2014, DATED: 31-10-2014**

1) ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಕಛೇರಿಯಲ್ಲಿ ಪ್ರಸ್ತುತ ಖಾಲಿ ಇರುವ ದಲಾಯತ್ ಮತ್ತು ವಾಚ್‌ಮನ್ ಸಮೂಹಕ್ಕೆ ಸೇರಿದ ಕೆಳಕಂಡ ಹುದ್ದೆಗಳಿಗೆ ನೇಮಕಾತಿಯನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿ (ನೇಮಕಾತಿ) ನಿಯಮಗಳು, 1993 ಮತ್ತು ಅದರಡಿ ಕಾಲಕಾಲಕ್ಕೆ ತಿದ್ದುಪಡಿ ಮಾಡಿರುವಂತೆ ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು, 1977ರ ನಿಯಮ 3 ರನ್ವಯ ದಲಾಯತ್ ಮತ್ತು ವಾಚ್‌ಮನ್ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನಿಗದಿಪಡಿಸಿರುವ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ :–

**2) ಹುದ್ದೆಗಳ ವಿವರ:–**

**(I) ಹೈದರಾಬಾದ್–ಕರ್ನಾಟಕ ಪ್ರದೇಶ ಮೀಸಲಾತಿಯನ್ನು ಹೊರತುಪಡಿಸಿ ಮೀಸಲಿರಿಸಿದ ಹುದ್ದೆಗಳು**

**ದಲಾಯತ್ ಹುದ್ದೆಗಳು**

| ಕ್ರ.ಸಂ. | ಮೀಸಲಾತಿ ವಿವರ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1 | ಪರಿಶಿಷ್ಟ ಜಾತಿ (ಮಹಿಳೆ) | 1 |
| 2 | ಸಾಮಾನ್ಯ ಅರ್ಹತೆ (ಮಹಿಳೆ) | 1 |
| 3 | ಸಾಮಾನ್ಯ ಅರ್ಹತೆ (ಇತರೆ)<br>(ಅಂಗವಿಕಲ–Low Vision) | 1 |
| 4 | ಪರಿಶಿಷ್ಟ ಪಂಗಡ (ಮಹಿಳೆ) | 1 |
| 5 | ಸಾಮಾನ್ಯ ಅರ್ಹತೆ (ಮಾಜಿ ಸೈನಿಕ) | 1 |
| 6 | ಪರಿಶಿಷ್ಟ ಜಾತಿ (ಇತರೆ) | 1 |
| 7 | ಸಾಮಾನ್ಯ ಅರ್ಹತೆ (ಇತರೆ) | 1 |
| 8 | ಪ್ರವರ್ಗ 3–ಬಿ (ಮಹಿಳೆ) | 1 |
| 9 | ಸಾಮಾನ್ಯ ಅರ್ಹತೆ (ಮಹಿಳೆ) | 1 |

**ವಾಚ್‌ಮನ್ ಹುದ್ದೆಗಳು**

| ಕ್ರ.ಸಂ. | ಮೀಸಲಾತಿ ವಿವರ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1 | ಪರಿಶಿಷ್ಟ ಜಾತಿ (ಇತರೆ) | 1 |

**(II) ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳು**

**ದಲಾಯತ್ ಹುದ್ದೆಗಳು**

| ಕ್ರ.ಸಂ. | ಮೀಸಲಾತಿ ವಿವರ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|
| 1 | ಪರಿಶಿಷ್ಟ ಜಾತಿ (ಇತರೆ) | 1 |
| 2 | ಸಾಮಾನ್ಯ ಅರ್ಹತೆ (ಇತರೆ) | 1 |
| 3 | ಪರಿಶಿಷ್ಟ ಪಂಗಡ (ಇತರೆ) | 1 |

**3) ವೇತನ ಶ್ರೇಣಿ: ರೂ. 9600–200–12000–250–13000–300–14200–350–14550**

**4) ಪ್ರಮುಖ ಸೂಚನೆ:–**

ಹೈದರಾಬಾದ್–ಕರ್ನಾಟಕ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಂಬಂಧಪಟ್ಟ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕಾಗಿರುತ್ತದೆ. ಹೆಚ್ಚಿನ ಮಾಹಿತಿಗಾಗಿ ಅಧಿಕೃತ ವೆಬ್‌ಸೈಟ್ www.kar.kat.nic.in ನಲ್ಲಿ ನೀಡಲಾಗಿರುವ ಅಧಿಸೂಚನೆಯನ್ನು ನೋಡುವುದು.

**5) ಶೈಕ್ಷಣಿಕ ವಿದ್ಯಾರ್ಹತೆ: 4ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ.**

6) **ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 1–12–2014 ಆಗಿರುತ್ತದೆ.**

1. ಅರ್ಜಿ ನಮೂನೆ ಪಡೆಯಲು ಇಚ್ಛೆಯುಳ್ಳ ಅಭ್ಯರ್ಥಿಗಳು ರೂ.50/–ನ್ನು ವಿಲೇಖನಾಧಿಕಾರಿ, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–560 009 ಇವರಿಗೆ ಸಂದಾಯವಾಗುವಂತೆ ಐಪಿಒ/ಡಿಡಿ ಮೂಲಕ ಪಾವತಿಸಿ ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಿಂದ ಪಡೆಯಬಹುದು. ಅಲ್ಲದೇ ಅಂಚೆ ಮೂಲಕ ಅರ್ಜಿಗಳನ್ನು ಪಡೆಯಲು ಅಪೇಕ್ಷಿಸುವವರು ರೂ.35/– ಮೌಲ್ಯದ ಅಂಚೆಚೀಟಿ ಅಂಟಿಸಿರುವ ಸ್ವ ವಿಳಾಸದ 20x30 ಸೆ.ಮೀ. ಅಳತೆಯುಳ್ಳ ಲಕೋಟೆಯೊಡನೆ ಅರ್ಜಿ ನಮೂನೆ ಶುಲ್ಕ ರೂ.50/– ನ್ನು **"ವಿಲೇಖನಾಧಿಕಾರಿ, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–560 009,"** ಇವರಿಗೆ ಸಂದಾಯವಾಗುವಂತೆ ಐ.ಪಿ.ಒ/ಡಿ.ಡಿ. ಮೂಲಕ ಪಾವತಿಸಿ **ದಿನಾಂಕ: 25–11–2014** ರೊಳಗೆ ಮೇಲ್ಕಂಡ ಕಛೇರಿಗೆ ಕಳುಹಿಸಿ ಪಡೆಯಬಹುದಾಗಿದೆ.

**ಸೂಚನೆ**: (1) **ದಿನಾಂಕ: 26–11–2014** ಸೇರಿದಂತೆ ನಂತರ ಅಂಚೆ ಮೂಲಕ ಅರ್ಜಿ ಕೋರಿ ಬರುವ ಯಾವುದೇ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

(2) ಭರ್ತಿ ಮಾಡಿದ ಅರ್ಜಿಗಳನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–560 009 ಇಲ್ಲಿ ಖುದ್ದಾಗಿ ಅಥವಾ ಅಂಚೆ ಮೂಲಕ, ಸಲ್ಲಿಸಬಹುದು.

(3) ಭರ್ತಿ ಮಾಡಿದ ಅರ್ಜಿಗಳನ್ನು ಅಂಚೆ ಮೂಲಕ ಸಲ್ಲಿಸಬಯಸುವ ಅಭ್ಯರ್ಥಿಗಳು **"ಕಾರ್ಯದರ್ಶಿ, ದಲಾಯತ್ ಹುದ್ದೆಗಳ ನೇಮಕಾತಿ ಸಮಿತಿ, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–560 009"**, ಇಲ್ಲಿಗೆ ಮಾತ್ರ ಸಲ್ಲಿಸತಕ್ಕದ್ದು.

(4) ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಮತ್ತು ನಿಗದಿತ ಸಮಯದ ನಂತರ ಬರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**7) ನಿಗದಿತ ಶುಲ್ಕ:– ಶುಲ್ಕ ಪಾವತಿ ಮಾಡುವ ವಿವರ**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ರ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ವಿನಾಯಿತಿಸಿದೆ. ಇತರೆ ಅಭ್ಯರ್ಥಿಗಳು ಶುಲ್ಕ ರೂ.50/– (ಐವತ್ತು ರೂಪಾಯಿ) ಐಪಿಒ/ಡಿಡಿ ಮೂಲಕ **"ವಿಲೇಖನಾಧಿಕಾರಿ, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–560 009"** ಇವರ ಪದನಾಮಕ್ಕೆ ಸಂದಾಯವಾಗುವಂತೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**8) ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಮತ್ತು ಈ ಕೆಳಗಿನ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

| | |
|---|---|
| ಸಾಮಾನ್ಯ ವರ್ಗ | 35 ವರ್ಷಗಳು |
| ಪ.ಜಾ/ಪ.ಪಂ/ಪ್ರ–1 | 40 ವರ್ಷಗಳು |
| 2ಎ, 2ಬಿ, 3ಎ, 3ಬಿ | 38 ವರ್ಷಗಳು |

ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ 1977ರ ನಿಯಮ 6 ರಂತೆ ವಯೋಮಿತಿಯನ್ನು ಅದರಲ್ಲಿ ತಿಳಿಸಿರುವ ಮಟ್ಟಿಗೆ ಸಂಬಂಧಪಟ್ಟ ದಾಖಲೆ ಒದಗಿಸಿದಲ್ಲಿ ಹೆಚ್ಚಿಸಲಾಗುವುದು.

**9) ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು :–**

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು).

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕ್ರೊಪ್ (ಎನ್‌ಸಿಸಿ) ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಈ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ <u>ಗ್ರಾಮೀಣ ಔದ್ಯಮೀಕರಣ ಯೋಜನೆಯ</u> ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಿಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು/ಅವಳು ಅಂತಹ ಗ್ರಾಮ ಪರಿಶೀಲಿಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಊ)ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಈ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು

(ಎ) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು

ಉಪಕಂಡಿಕೆ 8(ಅ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ ರದ್ದತಿ ನಿಯಮದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**10) ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ

- ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ
- ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಹಾಗೂ

- 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ

  ಸಂಬಂಧಿತ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ, ಚಾಲ್ತಿಯಲ್ಲಿರುವ ನಮೂನೆಯಲ್ಲಿ, ಪ್ರಮಾಣ ಪತ್ರವನ್ನು ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
- ಜನನ ಮತ್ತು ಮರಣಗಳ ನಿಬಂಧಕರಿಂದ ನೀಡಲ್ಪಟ್ಟ ಜನನ ಪ್ರಮಾಣ ಪತ್ರ.

**11) ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರಿಕನಾಗಿರತಕ್ಕದ್ದು

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತವಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಕಾಯ್ದಿರಿಸಿಕೊಂಡಿದೆ ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**12) ಪ್ರಮುಖವಾದ ಸೂಚನೆಗಳು:**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿಯೊಂದಿಗೆ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ಲಗತ್ತಿಸಿದ ಬಗ್ಗೆ ಅರ್ಜಿಯೊಂದಿಗೆ ಸ್ವೀಕೃತಿ ಪತ್ರದಲ್ಲಿ (check list) (ದ್ವಿಪ್ರತಿಯಲ್ಲಿ) ನೀಡಲಾಗಿರುವ ಕ್ರಮ ಸಂಖ್ಯೆಗಳ ಪಕ್ಕದಲ್ಲಿರುವ ಜಾಗದಲ್ಲಿ **"Enclosed"** ಎಂಬುದಾಗಿಯೂ ಹಾಗೂ ಕೇಳಿರುವ ಯಾವುದೇ ಪ್ರಮಾಣ ಪತ್ರವನ್ನು ಲಗತ್ತಿಸದೇ ಇದ್ದಲ್ಲಿ **"Not Enclosed"** ಎಂಬುದಾಗಿ ಸ್ಪಷ್ಟವಾಗಿ ಬರೆಯತಕ್ಕದ್ದು.

1) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳು

2) ಜನ್ಮ ದಿನಾಂಕವನ್ನು ನಮೂದಿಸಿರುವ 4ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪತ್ರ/ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತಭಾಗ.

3) ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)

4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿಗಳ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ಡಿ, ಇ, ಎಫ್ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)

5) ಅಂಗವಿಕಲ ಮೀಸಲಾತಿ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

6) ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

5) ಜನಗಣತಿ ಕಾರ್ಯದಲ್ಲಿ ಕೆಲಸ ಮಾಡಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

6) ಜೀತಮುಕ್ತಿಯ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

(ಮೇಲಿನ ಕ್ರಮ ಸಂಖ್ಯೆ 3, 4 ಮತ್ತು 5ರ ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅರ್ಜಿಯೊಡನೆ ಲಗತ್ತಿಸಿದೆ)

**13) ಕರ್ನಾಟಕ ಆಡಳಿತ ನ್ಯಾಯಮಂಡಳಿಯೊಡನೆ ಪತ್ರ ವ್ಯವಹಾರ**

ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅಭ್ಯರ್ಥಿಯ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ರೀತಿಯ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮನವಿಯ ಮೂಲಕ ಮಂಡಳಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಮಂಡಳಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಮಂಡಳಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಅಭ್ಯರ್ಥಿಗಳು ಮಂಡಳಿಯೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯು ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು.:–

ಅ) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

ಆ) ಹುದ್ದೆಯ ಹೆಸರು

ಇ) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**14) ಇತರೆ ಸೂಚನೆಗಳು:**

1) ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಅದನ್ನು ಮಡಚುವುದಾಗಲಿ, ಹರಿಯುವುದಾಗಲಿ ಮಾಡದೆ ಹಾಳಾಗದಂತೆ ಎಚ್ಚರ ವಹಿಸತಕ್ಕದ್ದು.

2) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಛಾಯಾ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

3) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ದೃಢೀಕರಿಸಿ ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಲ್ಲಿಸತಕ್ಕದ್ದು. ಕೊನೆಯ ದಿನಾಂಕದ ನಂತರ ಸ್ವೀಕರಿಸಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

4) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

5) ಅಭ್ಯರ್ಥಿಗಳು ನಿಗದಿತ ಕೊನೆಯ ದಿನಾಂಕದವರೆವಿಗೂ ನಿರೀಕ್ಷಿಸದೆ ಮುಂಚಿತವಾಗಿ ಅರ್ಜಿ ಸಲ್ಲಿಸುವಂತೆ ಸೂಚಿಸಿದೆ.

6) ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದು.

**15) <u>ದುರ್ನಡತೆ :</u>**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅವನು/ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**16) ಆಯ್ಕೆ ವಿಧಾನ:**

1. ಕರ್ನಾಟಕ ಆಡಳಿತ ನ್ಯಾಯಮಂಡಳಿ (ನೇಮಕಾತಿ) ನಿಯಮಗಳು, 1993 ಕಾಲ ಕಾಲಕ್ಕೆ ತಿದ್ದುಪಡಿಯಾದಂತೆ ಮತ್ತು ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರ ನಿಯಮ (3)ರ ಪ್ರಕಾರ ಸಂದರ್ಶನದ ಮೂಲಕ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು. ಸಂದರ್ಶನವು ಗರಿಷ್ಠ 50 ಅಂಕಗಳನ್ನು ಒಳಗೊಂಡಿರುತ್ತದೆ.
2. ಸಂಬಂಧಿಸಿದ ಉದ್ಯೋಗ ವಿನಿಮಯ ಮತ್ತು ತರಬೇತಿ ಕೇಂದ್ರಗಳಿಂದಲೂ ಸಹ ಅಭ್ಯರ್ಥಿಗಳ ಪಟ್ಟಿಯನ್ನು ತರಿಸಿಕೊಳ್ಳಲಾಗುವುದು.
3. ಅಭ್ಯರ್ಥಿಯು ಅರ್ಜಿಯಲ್ಲಿ ತಪ್ಪು ಅಥವಾ ಸುಳ್ಳು ಹೇಳಿಕೆಗಳನ್ನು ನೀಡಿದಲ್ಲಿ ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿದಲ್ಲಿ ಅಥವಾ ನೇಮಕಾತಿ ಉದ್ದೇಶಗಳಿಗಾಗಿ ಅನುಚಿತ ಮಾರ್ಗವನ್ನು ಅನುಸರಿಸಿದಲ್ಲಿ ಆಯ್ಕೆಗೆ ಅನರ್ಹರಾಗುವರು.
4. ಭರ್ತಿ ಮಾಡಿದ ಅರ್ಜಿಗಳನ್ನು ಕಾರ್ಯದರ್ಶಿ, ದಲಾಯತ್ ಹುದ್ದೆಗಳ ನೇಮಕಾತಿ ಸಮಿತಿ, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–09 ಇವರಿಗೆ ಸಲ್ಲಿಸುವಾಗ, **"ವಿಲೇಖನಾಧಿಕಾರಿ, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, 7ನೇ ಮಹಡಿ, ಕೆ.ಜಿ.ರಸ್ತೆ, ಬೆಂಗಳೂರು–09."** ಇವರಿಗೆ ಪಾವತಿಯಾಗುವಂತೆ ಪಡೆದ ರೂ.50–00 ಅಂಚೆ ಆದೇಶ/ಡಿಡಿ ಹಾಗೂ ಮೀಸಲಾತಿ ಪ್ರಮಾಣ ಪತ್ರ, ಜನನ ಪ್ರಮಾಣ ಪತ್ರಗಳ ಜೆರಾಕ್ಸ್ ಪ್ರತಿ ಹಾಗೂ ಭಾವಚಿತ್ರದೊಂದಿಗೆ **ದಿನಾಂಕ: 1–12–2014 ರ ಸಂಜೆ 5–00 ಗಂಟೆ** ಒಳಗಾಗಿ ಸಲ್ಲಿಸತಕ್ಕದ್ದು.

**17) <u>ಇನ್ನಿತರ ಷರತ್ತುಗಳು:</u>**

ಅ) ಭಾರತೀಯ ನಾಗರಿಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಜೀವಂತ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದ ಪೂರ್ವಾನುಮತಿ ಇಲ್ಲದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತವಾಗಿರಬೇಕು.

ಅಧ್ಯಕ್ಷರು ಮತ್ತು ನೇಮಕಾತಿ ಪ್ರಾಧಿಕಾರದ ಆದೇಶದ ಮೇರೆಗೆ,

**ಎಂ.ಮಹಾದೇವಯ್ಯ**

ವಿಲೇಖನಾಧಿಕಾರಿ

ಕರ್ನಾಟಕ ಆಡಳಿತ ನ್ಯಾಯಮಂಡಳಿ, ಬೆಂಗಳೂರು.

**ಅನುಬಂಧ–1**

**(ಪ.ಜಾ. /ಪ.ಪಂ. ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಡಿ**

**ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ**

**ನಿಯಮ 3ಎ (2)(3) ನ್ನು ನೋಡಿ)**

**ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ.**

**ಪ್ರಮಾಣ ಪತ್ರ**

-------------- ರಾಜ್ಯದ / ಕೇಂದ್ರಾಡಳಿತ ಪ್ರದೇಶದ * ------------ ಜಿಲ್ಲೆಯ / ವಿಭಾಗದ -------------------- ಗ್ರಾಮ/ಪಟ್ಟಣದ * ನಿವಾಸಿಯಾದ ಶ್ರೀ / ಶ್ರೀಮತಿ -------------ಎಂಬುವವರ ಮಗ/ಮಗಳಾದ ಶ್ರೀ/ ಶ್ರೀಮತಿ --------------- ಇವರು ಅನುಸೂಚಿತ ಜಾತಿ/ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ/ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

- ಸಂವಿಧಾನ (ಅನುಸೂಚಿತ ಜಾತಿಗಳು) ಅದೇಶ, 1950
- ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಅದೇಶ, 1950
- ಸಂವಿಧಾನ (ಅನುಸೂಚಿತ ಜಾತಿ)(ಕೇಂದ್ರಾಡಳಿತ ಪ್ರದೇಶಗಳು) ಅದೇಶ, 1950

- ಸಂವಿಧಾನ (ಅನುಸೂಚಿತ ಬುಡಕಟ್ಟುಗಳು)(ಕೇಂದ್ರಾಡಳಿತ ಪ್ರದೇಶಗಳು) ಅದೇಶ, 1951

  (ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ರಾಜ್ಯ ಪುನರ್ ರಚನಾ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ರಾಜ್ಯ ಅಧಿನಿಯಮ 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971ರ ಮೂಲಕ ತಿದ್ದುಪಡಿಯಾದಂತೆ).
- ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ, 1956
- ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಅದೇಶ, 1959.
- ಸಂವಿಧಾನ (ದಾದರ್ ಮತ್ತು ನಗರ ಹವೇಲಿ) ಅನುಸೂಚಿತ ಜಾತಿಗಳ ಅದೇಶ, 1962
- ಸಂವಿಧಾನ (ಪಾಂಡಿಚೇರಿ) ಅನುಸೂಚಿತ ಜಾತಿಗಳ ಅದೇಶ, 1964
- ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಅದೇಶ, 1967
- ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿಬುಡಕಟ್ಟುಗಳ ಅದೇಶ, 1988
- ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ.

ಶ್ರೀ / ಶ್ರೀಮತಿ/ಕುಮಾರಿ * ------------------ ಮತ್ತು / ಅಥವಾ ಅವನ */ಅವಳ * ಕುಟುಂಬವು --------- ರಾಜ್ಯ/ ಕೇಂದ್ರಾಡಳಿತ ಪ್ರದೇಶದ ------------ ಜಿಲ್ಲಾ / ವಿಭಾಗದ * ---------- ಗ್ರಾಮ / ಪಟ್ಟಣದ ಸಾಮಾನ್ಯ ನಿವಾಸಿ (ಗಳು).

ಸಹಿ:---------

ತಹಸೀಲ್ದಾರರು-----------

ಸ್ಥಳ :

ದಿನಾಂಕ: ಪದನಾಮ ಕಛೇರಿಯ ಮೊಹರಿನೊಂದಿಗೆ

ರಾಜ್ಯ / ಕೇಂದ್ರಾಡಳಿತ ಪ್ರದೇಶ *

* ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟುಬಿಡಿ/ ಹೊಡೆದು ಹಾಕಿ.

**<u>ಸೂಚನೆ</u>:** ಇಲ್ಲಿ ಉಪಯೋಗಿಸಿದ **"ಸಾಮಾನ್ಯ ನಿವಾಸಿಗಳು"** ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950ರ 20ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತದೆ.

ಬಾರತ ಸರ್ಕಾರದ ಪತ್ರ ಸಂಖ್ಯೆ: ಬಿಸಿ 12028/2/78 ಎಸ್ ಸಿ ಟಿ –1 ಗೃಹಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ: 13–2–74 ಇಎಸ್‌ಟಿ (ಎಸ್‌ಸಿಟಿ) ದಿನಾಂಕ 5ನೇ ಆಗಸ್ಟ್ 1975ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಅದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗಿರುವುದಿಲ್ಲ.

**(ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ – ಇ**

**ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ**

**ನಿಯಮ 3ಎ (2)(3) ನ್ನು ನೋಡಿ)**

ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರ

------------------------------------------- ಗ್ರಾಮ / ಪಟ್ಟಣ / ನಗರದ ನಿವಾಸಿಯಾದ ಶ್ರೀ / ಶ್ರೀಮತಿ ------- -------------------------------- ಇವರ ಮಗ / ಮಗಳು / ಪತಿ / ಪತ್ನಿಯಾದ ಶ್ರೀ / ಶ್ರೀಮತಿ ------------------------- -------------------- ಇವರು ಹಿಂದುಳಿದ ವರ್ಗಗಳ (ಪ್ರವರ್ಗ) ------------------------------------ಜಾತಿಯ ---------- ---------------- ಉಪಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ತಹಸೀಲ್ದಾರರು

ಸ್ಥಳ :

ದಿನಾಂಕ ---------- ತಾಲ್ಲೂಕು

ಕಛೇರಿಯ ಮೊಹರು.

**(ಪ್ರವರ್ಗ–2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ–ಎಫ್**

**ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ**

**ನಿಯಮ 3ಎ (2)(3) ನ್ನು ನೋಡಿ)**

ಪ್ರವರ್ಗ–1ರ ಹೊರತಾಗಿ, ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ನೀಡುವ ಆದಾಯ ಮತ್ತು ಜಾತಿ ಪ್ರಮಾಣ ಪತ್ರ ________.ರಲ್ಲಿ ವಾಸವಾಗಿರುವ ಶ್ರೀ / ಶ್ರೀಮತಿ ________________..ಇವರ ಮಗ / ಮಗಳು / ಪತಿ / ಪತ್ನಿಯಾದ, ಶ್ರೀ / ಶ್ರೀಮತಿ / ಕುಮಾರಿ ________________. ಇವರು ಮತ್ತು ಆತನ / ಅವಳ ತಂದೆ ತಾಯಿ / ಪೋಷಕರು / ಪತ್ನಿ / ಪತಿಯು, ಸರ್ಕಾರಿ ಆದೇಶಗಳ ಸಂಖ್ಯೆ / ಎಸ್ ಡಬ್ಲ್ಯೂಡಿ 225 ಬಿಸಿಎ 2000 ದಿನಾಂಕ: 30–03–2002 ರಲ್ಲಿ ನಿರ್ದಿಷ್ಟಪಡಿಸಿದ ಮೇಲುಸ್ತರದ (ಕ್ರೀಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು :

ಅಭ್ಯರ್ಥಿಯಾಗಲಿ ಅಥವಾ ಆತನ / ಆಕೆಯ ತಂದೆ ತಾಯಿ / ಪೋಷಕರಾಗಲಿ / ಪತ್ನಿ / ಪತಿಯಾಗಲಿ, ಸರ್ಕಾರದ ಸೇವೆಯಲ್ಲಿ 1ನೇ ದರ್ಜೆಯ ಅಥವಾ 2ನೇ ದರ್ಜೆಯ ಅಧಿಕಾರಿ–ಯಾಗಿಲ್ಲವೆಂದು:

ಅಥವಾ

ಸಾರ್ವಜನಿಕ ವಲಯ ಉದ್ಯಮದಲ್ಲಿ ತತ್ಸಮಾನದ ಹುದ್ದೆಯನ್ನು ಹೊಂದಿರುವುದಿಲ್ಲ.

ಅಥವಾ

ಖಾಸಗಿ ನಿಯೋಜಕರ ಕೈ ಕೆಳಗೆ, 2ನೇ ದರ್ಜೆಯ ಅಧಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ ರೂ.6000/– – 12000/– ಪ್ರಾರಂಭಿಕ ಹಂತ) ಕಡಿಮೆಯಿಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದು:

ಅಥವಾ

ಆತನ/ಆಕೆಯ ತಂದೆ ತಾಯಿ / ಪೋಷಕರು/ಪತ್ನಿ/ಪತಿಯ ಆದಾಯವೂ ಎರಡು ಲಕ್ಷ ಮೀರಿರುವುದಿಲ್ಲವೆಂದು:

ಅಥವಾ

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರಲ್ಲಿ ನಿಗದಿಪಡಿಸಿರುವಂತೆ ಆತನ/ಆಕೆಯ ತಂದೆ ತಾಯಿ / ಪೋಷಕರು / ಪತ್ನಿ / ಪತಿಯ ಮಾರಾಟ ತೆರಿಗೆದಾರನಲ್ಲ ಅಥವಾ ಆತನ / ಆಕೆಯ ತಂದೆ ತಾಯಿ / ಪೋಷಕ / ಪತ್ನಿ / ಪತಿಯು ಅಥವಾ ಇವರಿಬ್ಬರೂ 10 ಯೂನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 25 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಷನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 225 ಬಿಸಿಎ 2000 ದಿನಾಂಕ: 30–03–2002ರ ಅನ್ವಯ ಶ್ರೀ / ಶ್ರೀಮತಿ / ಕುಮಾರಿ ______________________ಇವರು ___________________ಜಾತಿಗೆ_____________________. ಸೇರಿದ ಉಪಜಾತಿಯುವರಾಗಿದ್ದು, ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 225 ಬಿಸಿಎ 2000 ದಿನಾಂಕ: 30–03–2002ರ ಅನ್ವಯ ಹಿಂದುಳಿದ ವರ್ಗಗಳ ಪ್ರವರ್ಗ __________________..(2ಎ, 2ಬಿ, 3ಎ, 3ಬಿ) ಸೇರಿರುತ್ತಾರೆ.

ಸ್ಥಳ: ತಹಸೀಲ್ದಾರರು

ದಿನಾಂಕ: .. ತಾಲ್ಲೂಕು,

ಕಛೇರಿಯ ಮೊಹರು.

**ನಮೂನೆ–1**

**ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕೆ ಸೇರಿಲ್ಲವೆಂದು ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ**

**ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿ ಮಾಡಬೇಕಾದ ನಮೂನೆ**

ಇವರಿಗೆ:

ತಹಶೀಲ್ದಾರರು,

__________ತಾಲ್ಲೂಕು

__________ ಜಿಲ್ಲೆ.

ಮಾನ್ಯರೆ,

ಶ್ರೀ/ ಶ್ರೀಮತಿ ______________________ ಎಂಬುವವರ ಮಗ/ಮಗಳು/ಪತಿ/ಪತ್ನಿ ______________________ ಆದ ನಾನು ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮೀಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತಾ ಕೋರುತ್ತೇನೆ.

1. ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ :
2. ಅಭ್ಯರ್ಥಿಯ ಸ್ವಂತ ಸ್ಥಳ ಗ್ರಾಮ :

   ತಾಲ್ಲೂಕು :

   ಜಿಲ್ಲೆ :
3. ಅಭ್ಯರ್ಥಿಯು ಹುಟ್ಟಿದ ದಿನಾಂಕ, ವಯಸ್ಸು ಮತ್ತು ಹುಟ್ಟಿದ ಸ್ಥಳ:

4. ಅಭ್ಯರ್ಥಿಯ ತಂದೆ/ತಾಯಿ/ಪೋಷಕರ ಪತಿಯ/ಪತ್ನಿಯ ಹೆಸರು ಮತ್ತು ಉದ್ಯೋಗ:
   (ಉದ್ಯೋಗವು ಸರ್ಕಾರಿ/ಅರೆ ಸರ್ಕಾರಿ/ಸಾರ್ವಜನಿಕ ಉದ್ಯಮ/ಖಾಸಗಿ)
5. ಅಭ್ಯರ್ಥಿಯ ಪ್ರಸ್ತುತ ವಿಳಾಸ:
   (ಸ್ಪಷ್ಟವಾಗಿ ನಮೂದಿಸುವುದು)
6. ಅಭ್ಯರ್ಥಿಯ ಖಾಯಂ ವಿಳಾಸ:
7. ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರ:
   ಪ್ರಾಥಮಿಕ:
   ಮಾಧ್ಯಮಿಕ:
   ಪ್ರೌಢ
8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತವಿಲ್ಲದಿದ್ದರೆ) ಇವರ ಒಟ್ಟು ವಾರ್ಷಿಕ ಆದಾಯ ಎಲ್ಲಾ ಮೂಲಗಳಿಂದ:
   1) ವೇತನ ಶ್ರೇಣಿ
   2) ಜಮೀನಿನ ವಿವರ
   3) ಇತರ ಮೂಲಗಳು
9. ಆದಾಯ ತೆರಿಗೆ ಪಾವತಿದಾರರೇ?
10. ಸಂಪತ್ತು ತೆರಿಗೆ ಪಾವತಿದಾರರೇ?
11. ಮಾರಾಟ ತೆರಿಗೆ ಪಾವತಿದಾರರೇ?

## ಪ್ರಾಮಾಣೀಕೃತ ಘೋಷಣೆ

ಈ ಮೇಲೆ ನನ್ನಿಂದ ಒದಗಿಸಿದ ಮಾಹಿತಿ/ವಿವರಣೆಯು ನಾನು ತಿಳಿದಿರುವಷ್ಟರ ಮಟ್ಟಿಗೆ ಸತ್ಯವೆಂದು ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ ಮತ್ತು ಘೋಷಿಸುತ್ತೇನೆ.

ಸ್ಥಳ: ತಮ್ಮ ವಿಧೇಯ

ದಿನಾಂಕ: (ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ, ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ಸ್ಥಳ: ತಂದೆ/ತಾಯಿ/ಪೋಷಕರ ಸಹಿ

ಬೆಂಗಳೂರು: (ತಂದೆ/ತಾಯಿ ಜೀವಂತವಿಲ್ಲದಿದ್ದರೆ)

(ಹೆಂಡತಿ/ಗಂಡ/ಇವರ ಸಹಿ)

## ಸ್ಥಳೀಯ ಇಬ್ಬರು ಸಾಕ್ಷಿದಾರರು

ಅಭ್ಯರ್ಥಿಯ ಮತ್ತು ಅವರ ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇವೆ.

ಸಾಕ್ಷಿದಾರರ ಸಹಿ: 1)

(ಪೂರ್ಣ ವಿಳಾಸದೊಂದಿಗೆ) 2)

## ಪರಿಶೀಲನಾ ಪ್ರಮಾಣ ಪತ್ರ

1. ಶ್ರೀ/ಶ್ರೀಮತಿ ____________________ಎಂಬುವವರ ಮಗ/ಮಗಳು/ ಪತಿ/ಪತ್ನಿ ಶ್ರೀ/ಶ್ರೀಮತಿ/ಕುಮಾರಿ____________________ಎಂಬುವವರು ಕರ್ನಾಟಕ ರಾಜ್ಯದ ________ ಜಿಲ್ಲೆಯ ವಿಭಾಗ ______________ ಗ್ರಾಮ/ಪಟ್ಟಣ/ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆ ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.
2. ಶ್ರೀ/ ಶ್ರೀಮತಿ ________________ ಇವರ ತಂದೆ/ತಾಯಿ/ಪೋಷಕರು ಸರ್ಕಾರಿ ಆದೇಶ ಸಂಖ್ಯೆ: ಎಸ್ ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ; 31.01.1995 ಅನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ದಿನಾಂಕ: ತಹಶೀಲ್ದಾರ್,

ಸ್ಥಳ: ________ ತಾಲ್ಲೂಕು

ಕಛೇರಿಯ ಮೊಹರು

**ಹೈದರಾಬಾದ್–ಕರ್ನಾಟಕ ಮೀಸಲಾತಿ ಬಯಸಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಪ್ರಮಾಣ ಪತ್ರಗಳು:**

ಅನುಬಂಧ – ಎ

ಅರ್ಹತಾ ಪ್ರಮಾಣ ಪತ್ರ

[ಅನುಚ್ಛೇದ 371 (ಜೆ) ಮೇರೆಗೆ]

(3(3)ನೇ ನಿಯಮ ನೋಡಿ)

[ಪ್ರಮಾಣ ಪತ್ರ ನೀಡಲು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್ – ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ / ಶ್ರೀಮತಿ ---------------- ರವರು ------------ ರವರ ಮಗ / ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ---- ------------ ಜಿಲ್ಲೆಯ --------------- ತಾಲ್ಲೂಕಿನ -------- ಗ್ರಾಮ / ಪಟ್ಟಣದ ಸ್ಥಳೀಯ ವ್ಯಕ್ತಿಯಾಗಿದ್ದಾರೆ.

ಸ್ಥಳ: --------------------- ಹೆಸರು ---------------------

ದಿನಾಂಕ: ------------------- ಅಸಿಸ್ಟೆಂಟ್ ಕಮೀಷನರ್ ------------------ಉಪವಿಭಾಗ --------- ---------ಜಿಲ್ಲೆ

ಅನುಬಂಧ – ಬಿ

ವಾಸಸ್ಥಳ ಪ್ರಮಾಣ ಪತ್ರ

(ಅನುಚ್ಛೇದ 371 (ಜೆ) ಮೇರೆಗೆ)

(ನಿಯಮ 4 (ಬಿ) (2) (iii) ನೋಡಿ)

[ಪ್ರಮಾಣ ಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ --------------- ರವರು -------------- ರವರ ಮಗ / ಹೆಂಡತಿಯಾಗಿದ್ದು, ಇವರು ----------------- ಜಿಲ್ಲೆಯ -------------- ತಾಲ್ಲೂಕಿನ ---------------- ಗ್ರಾಮ / ಪಟ್ಟಣದ ಈ ಕೆಳಕಂಡ ವಿಳಾಸದಲ್ಲಿ ಕೆಳಗೆ ಸೂಚಿಸಿರುವ ಅವಧಿಯಲ್ಲಿ ವಾಸವಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ:

| ಕ್ರ ಸಂ | ವಿಳಾಸ | ಯಾವ ದಿನಾಂಕದಿಂದ ಯಾವ ದಿನಾಂಕದವರೆಗೆ | ಸಾಕ್ಷ್ಯವಿವರ (ಆಧಾರವಾಗಿಟ್ಟುಕೊಂಡಿರುವ ಸಾಕ್ಷ್ಯದ ಎಲ್ಲಾ ಪ್ರಮಾಣೀಕೃತ ಪ್ರತಿಗಳನ್ನು ಲಗತ್ತಿಸಿ) |
|---|---|---|---|
| 1 | | | |
| 2 | | | |
| 3 | | | |
| 4 | | | |
| 5 | | | |
| 6 | | | |

ಸಾಕ್ಷ್ಯದಲ್ಲಿ ಹೇಳಲಾದ ಎಲ್ಲಾ ಲಗತ್ತುಗಳನ್ನು ಕೋಷ್ಟಕದಲ್ಲಿ ಸಂಕ್ಷಿಪ್ತವಾಗಿ ಅಳವಡಿಸಿ

ಸ್ಥಳ: --------------------- ಹೆಸರು --------------------

ದಿನಾಂಕ: --------------- ತಹಸೀಲ್ದಾರ್ --------------- –

------ತಾಲ್ಲೂಕು ----------ಜಿಲ್ಲೆ

ಅನುಬಂಧ – ಸಿ

ವ್ಯಾಸಂಗ ಪ್ರಮಾಣ ಪತ್ರ

[ಅನುಚ್ಛೇದ 371 (ಜೆ) ಮೇರೆಗೆ]

(ನಿಯಮ 4 (ಸಿ)(2)(ii) ನೋಡಿ]

[ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್ – ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ /ಶ್ರೀಮತಿ-----------------ರವರು ----------- ರವರ ಮಗ/ ಹೆಂಡತಿಯಾಗಿದ್ದು,ಇವರು -------------- ಜಿಲ್ಲೆಯ ---- ------------ ತಾಲ್ಲೂಕಿನ -------------- ಕಾಲೇಜು / ಶಾಲೆಯಲ್ಲಿ ಈ ಕೆಳಗೆ ಸೂಚಿಸಲಾದ ಅವಧಿಯಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

| ಕ್ರ. ಸಂ | ತರಗತಿ / ಹಂತ | ಯಾವ ದಿನಾಂಕದಿಂದ ಯಾವ ದಿನಾಂಕದ ವರೆಗೆ | ದಾಖಲೆಯ ಉಲ್ಲೇಖ |
|---|---|---|---|
| | | | |

ಇವನು ಈ ಕೆಳಕಂಡ ವರ್ಷಗಳಲ್ಲಿ ಈ ಕೆಳಕಂಡ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿದ್ದಾನೆ / ಅನುತ್ತೀರ್ಣನಾಗಿದ್ದಾನೆ:-

| ಕ್ರ. ಸಂ | ತರಗತಿ / ಪರೀಕ್ಷೆ / ಹಂತದ ಹೆಸರು | ವರ್ಷ | ಅನುತ್ತೀರ್ಣ / ಉತ್ತೀರ್ಣ | ದಾಖಲೆಯ ಉಲ್ಲೇಖ |
|---|---|---|---|---|

ಸ್ಥಳ: -------------------- ಹೆಸರು: --------------------

ದಿನಾಂಕ: --------------- ಸಂಸ್ಥೆಯ ಮುಖ್ಯಸ್ಥರು

**ಪ್ರಮಾಣ ಪತ್ರ**

ಮೇಲೆ ನೀಡಲಾದ ಪ್ರಮಾಣ ಪತ್ರವು ಲಭ್ಯವಿರುವ ದಾಖಲೆಯ ಪ್ರಕಾರ ಸತ್ಯವಾಗಿದೆ ಎಂಬುದನ್ನು ನಾನು ಸ್ವತಃ ಮನವರಿಕೆ ಮಾಡಿಕೊಂಡಿದ್ದೇನೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: -------------------- ಹೆಸರು: ---------------------

ದಿನಾಂಕ: -------------- ಕ್ಷೇತ್ರ ಶಿಕ್ಷಣಾಧಿಕಾರಿ : ---------- ----

----------ತಾಲ್ಲೂಕು ----------ಜಿಲ್ಲೆ

ಅನುಬಂಧ – ಡಿ

ಸ್ವಗ್ರಾಮ ಪ್ರಮಾಣಪತ್ರ

(Home Town Certificate)

[ಅನುಚ್ಛೇದ 371 (ಜೆ) ಮೇರೆಗೆ] (4 (ಇ) ನಿಯಮ ನೋಡಿ)

[ ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಬಾದ್ – ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ / ಶ್ರೀಮತಿ ----------------- ರವರು ------------------- ರವರ ಮಗ / ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ----------------- ಜಿಲ್ಲೆಯ ---------------- ತಾಲ್ಲೂಕಿನ ------------------ ಗ್ರಾಮ / ಪಟ್ಟಣವನ್ನು ತನ್ನ ಸ್ವಗ್ರಾಮ / ಸ್ಥಳ ಎಂದು ತನ್ನ ಸೇವಾ ಪುಸ್ತಕದಲ್ಲಿ ಘೋಷಿಸಿರುತ್ತಾರೆ. ಸೇವಾ ಪುಸ್ತಕದಲ್ಲಿರುವ ನಮೂದನ್ನು ನಾನು ಖುದ್ದಾಗಿ ಪರಿಶೀಲಿಸಿದ್ದೇನೆ ಮತ್ತು ಮೇಲಿನ ನಮೂದು 01-01-2013ಕ್ಕೆ ಮುಂಚೆ ಸೇವಾ ಪುಸ್ತಕದಲ್ಲಿ ನಮೂದು ಮಾಡಲಾಗಿತ್ತೆಂದು ಸ್ವತಃ ಮನವರಿಕೆ ಮಾಡಿಕೊಂಡಿರುತ್ತೇನೆ.

ಸ್ಥಳ: ------------------------ ಹೆಸರು: --------------------------

ದಿನಾಂಕ: ---------------- ಪದನಾಮ ----------------

ಕಛೇರಿ ------------

ಇಲಾಖೆ-----------

ಅನುಬಂಧ – ಇ

ಸಿಂಧುತ್ವ ಪ್ರಮಾಣ ಪತ್ರ

(ಅನುಚ್ಛೇದ 371 (ಜೆ) ಮೇರೆಗೆ)

(ನಿಯಮ 6(3) ನೋಡಿ)

[ ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಬಾದ್ – ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ / ಶ್ರೀಮತಿ ------------- ರವರು ---------- ರವರ ಮಗ/ಹೆಂಡತಿಯಾಗಿದ್ದು,ಇವರು ಕರ್ನಾಟಕ ರಾಜ್ಯದ --------------- ಜಿಲ್ಲೆಯ ----------- ತಾಲ್ಲೂಕಿನ ----- ಗ್ರಾಮ / ಪಟ್ಟಣದ ಸ್ಥಳೀಯ ವ್ಯಕ್ತಿಯಾಗಿರುತ್ತಾರೆ. ನಾವು ಅರ್ಹತಾ ಪ್ರಮಾಣ ಪತ್ರದ ಸರಿತನವನ್ನು ಪರಿಶೀಲಿಸಿದ್ದೇವೆ ಹಾಗೂ ಅದನ್ನು ಮಾನ್ಯ ಮಾಡಿದ್ದೇವೆ.

ಸ್ಥಳ: ------------------ ಹೆಸರು: ---------------

ದಿನಾಂಕ: ---------------- ಜಿಲ್ಲಾಧಿಕಾರಿ --------- ----

------- ಜಿಲ್ಲೆ

ಹೆಸರು ---------------------- ಹೆಸರು: ------------------

ಸೂಪರಿಂಟೆಂಡೆಂಟ್ ಆಫ್ ಪೋಲೀಸ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ

----------- ಜಿಲ್ಲೆ ಜಿಲ್ಲೆ ಪಂಚಾಯತ್ ---------- ಜಿಲ್ಲೆ

ಕರ್ನಾಟಕ ಸರ್ಕಾರ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೇನೆನಿ 2005, ದಿನಾಂಕ: 19.11.2005

**CERTIFICATE FOR THE PERSONS WITH DISABILITIES**

This is to certify that Sri/Smt./Kum. ______________________ son/wife/ daughter of Shri___________________________________ Age _______________ old male/female, Registration No.__________in a case of ________________________ He/she is physically disabled/visual disabled/speech & hearing disabled and has ______% (percent) permanent (physical impairment visual impairment speech & hearing impairment) in relation to his/her __________________

**Note:** 1. This condition is progressive/non-progressive/likely to improve/not likely to improve.*

2. Re-assessment is not recommended/is recommended after a period of _______________ months/years.*

*** Strike out which is not applicable.**

(Recent Attested

Photograph showing

The disability

Affixed here)

Sd/- Sd/- Sd/-

(Doctor) (Doctor) (Doctor)

Countersigned by the

Medical Superintendent CMO/Head

Of Hospital (with seal)

Signature/Thumb impression

Of the disabled person

**PR. 121**

**SC. 1000**

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560001.**

**ಅಧಿಸೂಚನೆ**

**ಸಂಖ್ಯೆ:ಇಪ(1)1167/2014-15/ಪಿಎಸ್‌ಸಿ, ದಿನಾಂಕ: 30-09-2014.**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಡೆಸುವಿಕೆ) ನಿಯಮಗಳು, 1965 ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಮೇರೆಗೆ ಆಯೋಗವು **2014ನೇ ಸಾಲಿನ ದ್ವಿತೀಯ** ಅಧಿವೇಶನದ ಇಲಾಖಾ ಪರೀಕ್ಷೆಗಳನ್ನು ನಡೆಸಲು ಕರ್ನಾಟಕ ನಾಗರಿಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ. ಈ ಬಗ್ಗೆ ಸೂಚನೆಗಳನ್ನು ಆಯೋಗದ ವೆಬ್‌ಸೈಟ್ "**http://kpsc.kar.nic.in**"ನಲ್ಲಿ ಬಿತ್ತರಿಸಲಾಗಿದೆ. ಈ ಪರೀಕ್ಷೆಗಳನ್ನು 2014ರ ಡಿಸೆಂಬರ್ ಮತ್ತು 2015ರ ಜನವರಿ ಮಾಹೆಯಲ್ಲಿ ನಡೆಸಲಾಗುವುದು.

ಅರ್ಜಿ ಸಲ್ಲಿಸಲು ಮತ್ತು ಶುಲ್ಕ ಪಾವತಿಸಲು ನಿಗದಿಪಡಿಸಿದ ದಿನಾಂಕಗಳು ಹಾಗೂ ಅಗತ್ಯ ದಾಖಲೆಗಳನ್ನು ಸಲ್ಲಿಸಲು ನಿಗದಿಪಡಿಸಿರುವ ದಿನಾಂಕಗಳು ಈ ಕೆಳಗಿನಂತಿವೆ:-

| ಕ್ರ.ಸಂ. | ವಿಷಯ | ನಿಗದಿಪಡಿಸಿದ ದಿನಾಂಕ |
|---|---|---|
| 1 | ಅರ್ಜಿ ಸಲ್ಲಿಸಲು ಮತ್ತು ಶುಲ್ಕ ಪಾವತಿಸಲು ಪ್ರಾರಂಭಿಕ ದಿನಾಂಕ | 30-09-2014 |
| 2 | ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಮತ್ತು ಸಮಯ | 29-10-2014 (ಸಂಜೆ 5.00 ಗಂಟೆಯೊಳಗೆ) |
| 3 | ಶುಲ್ಕ ಸಂದಾಯ ಮಾಡಲು ಕೊನೆಯ ದಿನಾಂಕ ಮತ್ತು ಸಮಯ | 30-10-2014 (ಮಧ್ಯಾಹ್ನ 2.00 ಗಂಟೆಯೊಳಗೆ) |
| 4 | ಎಸ್.ಎ.ಎಸ್. ಪರೀಕ್ಷಾ ಅಭ್ಯರ್ಥಿಗಳು ನಿಗದಿತ ಅನುಬಂಧ-ಡಿ ಮತ್ತು ಅಕೌಂಟ್ಸ್ ಹೈಯರ್ ಪ್ರಮಾಣಪತ್ರದ ದೃಢೀಕೃತ ಜೆರಾಕ್ಸ್ ಪ್ರತಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ಮತ್ತು ಸಮಯ | 20-11-2014 (ಸಂಜೆ 5.00 ಗಂಟೆಯೊಳಗೆ ಆಯೋಗದಲ್ಲಿ ಸ್ವೀಕೃತವಾಗಿರಬೇಕು) |

| | | |
|---|---|---|
| 5 | ಅನುಲೇಖಕನ ಸಹಾಯ ಕೋರಿ ಮನವಿ ಸಲ್ಲಿಸಲು ಕೊನೆಯ ದಿನಾಂಕ ಮತ್ತು ಸಮಯ | 20–11–2014<br>(ಸಂಜೆ 5.00 ಗಂಟೆಯೊಳಗೆ ಆಯೋಗದಲ್ಲಿ ಸ್ವೀಕೃತವಾಗಿರಬೇಕು) |
| 6 | ಪರೀಕ್ಷಾ ಕೇಂದ್ರ ಬದಲಾವಣೆಗೆ ಮನವಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ಮತ್ತು ಸಮಯ | 25–11–2014<br>(ಸಂಜೆ 5.00 ಗಂಟೆಯೊಳಗೆ ಆಯೋಗದಲ್ಲಿ ಸ್ವೀಕೃತವಾಗಿರಬೇಕು) |
| 7 | ವಿದ್ಯಾರ್ಹತೆಗೆ ಸಂಬಂಧಿಸಿದ ವಿನಾಯಿತಿಗಾಗಿ ಮಾಹಿತಿ/ದಾಖಲೆಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ಮತ್ತು ಸಮಯ | 20–11–2014<br>(ಸಂಜೆ 5.00 ಗಂಟೆಯೊಳಗೆ ಆಯೋಗದಲ್ಲಿ ಸ್ವೀಕೃತವಾಗಿರಬೇಕು) |

ಕೆಲವು ವಿಷಯಗಳ ಪರೀಕ್ಷೆಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳು ಹಾಗೂ ನವದೆಹಲಿ ಮತ್ತು ಮಸ್ಸೂರಿ ಕೇಂದ್ರಗಳಲ್ಲಿ, ಕೆಲವು ವಿಷಯಗಳ ಪರೀಕ್ಷೆಗಳನ್ನು ಬೆಂಗಳೂರು, ಮೈಸೂರು, ಶಿವಮೊಗ್ಗ, ಬೆಳಗಾವಿ, ಗುಲ್ಬರ್ಗಾ, ಮಂಗಳೂರು, ಗದಗ, ರಾಯಚೂರು, ಬಿಜಾಪುರ, ನವದೆಹಲಿ ಮತ್ತು ಮಸ್ಸೂರಿ ಪರೀಕ್ಷಾ ಕೇಂದ್ರಗಳಲ್ಲಿ ಮತ್ತು ಕೆಲವು ವಿಷಯಗಳ ಪರೀಕ್ಷೆಗಳನ್ನು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲು ಉದ್ದೇಶಿಸಲಾಗಿದ್ದು, ಪರೀಕ್ಷಾ ಕೇಂದ್ರದ ಬಗೆಗಿನ ವಿವರಗಳನ್ನು ಇದೇ ಅಧಿಸೂಚನೆಯ ಕಂಡಿಕೆ–6ರ (ಅ), (ಆ), (ಇ), (ಈ) ಮತ್ತು (ಉ)ಗಳಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ ಹಾಗೂ ವಿವಿಧ ಕೇಂದ್ರಗಳಲ್ಲಿ ನಡೆಸಲಾಗುವ ವೇಳಾ ಪಟ್ಟಿಯನ್ನು ಅನುಬಂಧ–'ಎ', ಅನುಬಂಧ–'ಬಿ' ಮತ್ತು ಅನುಬಂಧ–'ಸಿ'ನಲ್ಲಿ ನೀಡಲಾಗಿದೆ.

ವಿನಾಯಿತಿಗೆ ಸಂಬಂಧಿಸಿದಂತೆ ಅಗತ್ಯ ಮಾಹಿತಿಯನ್ನು ಆನ್‌ಲೈನ್ ಅರ್ಜಿಯಲ್ಲಿ ನಮೂದಿಸದಿದ್ದಲ್ಲಿ ಅಂತಹ ವಿನಾಯಿತಿಯನ್ನು ಪರಿಗಣಿಸುವುದಿಲ್ಲ. ಅರ್ಜಿಯಲ್ಲಿ ನಮೂದಿಸದೆ ಮನವಿಯನ್ನು ಆಯೋಗಕ್ಕೆ ಸಲ್ಲಿಸಿದಲ್ಲಿ ಅಂತಹ ಮನವಿಯನ್ನು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವಿಲ್ಲದೆ ತಿರಸ್ಕರಿಸಲಾಗುತ್ತದೆ.

ಮೇಲೆ ನಿಗದಿಪಡಿಸಿದ ದಿನಾಂಕಗಳ / ಸಮಯದ ನಂತರ ಆಯೋಗದಲ್ಲಿ ಸ್ವೀಕೃತವಾಗುವ ಮನವಿ / ದಾಖಲೆ / ಅನುಬಂಧ–'ಡಿ'ಯನ್ನು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರ ಮಾಡದೆ ನೇರವಾಗಿ ತಿರಸ್ಕರಿಸಲಾಗುತ್ತದೆ. ಈ ಬಗ್ಗೆ ತಿರಸ್ಕೃತಗೊಂಡ ಅಭ್ಯರ್ಥಿಗಳ ಪಟ್ಟಿಯನ್ನು ಆಯೋಗದ ವೈಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

ಪರೀಕ್ಷೆಗೆ ಹಾಜರಾಗಬಯಸುವ ಅಭ್ಯರ್ಥಿಗಳು ಒಂದು ಅರ್ಜಿಯಲ್ಲಿ ಗರಿಷ್ಠ ಆರು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬಹುದು. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವಾಗ ವಿಷಯ ಮತ್ತು ವಿಷಯ ಸಂಕೇತಗಳನ್ನು ಎಚ್ಚರಿಕೆಯಿಂದ ಭರ್ತಿ ಮಾಡಲು ಸೂಚಿಸಿದೆ. ಅರ್ಜಿ ಭರ್ತಿ ಮಾಡುವ ಸಂದರ್ಭದಲ್ಲಿ ಅಭ್ಯರ್ಥಿಗಳು ಆಯ್ಕೆ ಮಾಡಿಕೊಳ್ಳುವ ವಿಷಯ ಮತ್ತು ವಿಷಯ ಸಂಕೇತಗಳನ್ನು ತಪ್ಪಾಗಿ ಆಯ್ಕೆ ಮಾಡಿಕೊಂಡು ಆನಂತರ ಬದಲಾವಣೆ ಮಾಡುವಂತೆ ಕೋರಿ ಸಲ್ಲಿಸಲಾಗುವ ಮನವಿಗಳನ್ನು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವಿಲ್ಲದೆ ನೇರವಾಗಿ ತಿರಸ್ಕರಿಸಲಾಗುವುದು.

–2–

**ಸೂಚನೆಗಳು:**

(1) ಸ್ಥಳೀಯ ಅಭ್ಯರ್ಥಿಗಳು, ಸ್ಟೈಪೆಂಡರಿ ಪದವೀಧರರು, ದೈನಿಕ ಮುಜರಾಯಿ ಮಾಸಿಕ ವೇತನದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳು, ಕರಾರು ಆಧಾರದಲ್ಲಿ ಹಾಗೂ ಅನುದಾನಿತ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳು ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗುವುದಿಲ್ಲ.

(2) ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸುವ ನೌಕರರು ತಮ್ಮ ಮೇಲಧಿಕಾರಿಗಳಿಂದ ಕಡ್ಡಾಯವಾಗಿ ಲಿಖಿತ ಅನುಮತಿ ಪಡೆದು ಅರ್ಜಿ ಸಲ್ಲಿಸತಕ್ಕದ್ದು. ಮುಂದೆ ಆಯೋಗವು ಅಪೇಕ್ಷಿಸಿದ ಸಂದರ್ಭದಲ್ಲಿ ಅಭ್ಯರ್ಥಿಗಳು ಲಿಖಿತ ಅನುಮತಿ ಪತ್ರವನ್ನು ಹಾಜರುಪಡಿಸಲು ಬದ್ಧರಾಗಿರತಕ್ಕದ್ದು.

(3) ಇಲಾಖಾ ಪರೀಕ್ಷೆಗಳಿಗೆ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು ಕಡ್ಡಾಯವಾಗಿ ನಿಗದಿಪಡಿಸಿರುವ ಪರೀಕ್ಷಾ ಶುಲ್ಕವನ್ನು ಮತ್ತು ಉತ್ತೀರ್ಣತೆಯ ಪ್ರಮಾಣ ಪತ್ರ ರವಾನಿಸುವ ಅಂಚೆ ವೆಚ್ಚ ರೂ. 30/–ಅನ್ನು ಪಾವತಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(4) ಶುಲ್ಕ ಪಾವತಿಸದ, ಅಪೂರ್ಣ ಅರ್ಜಿಗಳನ್ನು ಮತ್ತು ಆನ್‌ಲೈನ್ ವಿಧಾನವನ್ನು ಹೊರತುಪಡಿಸಿ ಇತರೆ ಯಾವುದೇ ವಿಧಾನದಲ್ಲಿ ಇಲಾಖಾ ಪರೀಕ್ಷೆಗಾಗಿ ಸಲ್ಲಿಸಿದ ಅರ್ಜಿಗಳನ್ನು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವಿಲ್ಲದೆ/ಸೂಚನೆಯನ್ನೂ ನೀಡದೇ ತಿರಸ್ಕರಿಸಲಾಗುವುದು.

(5) ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಭರ್ತಿ ಮಾಡುವ ಮುನ್ನ ಆಯೋಗದ ವೆಬ್‌ಸೈಟ್‌ನಲ್ಲಿ ಲಭ್ಯವಿರುವ ಸೂಚನೆಗಳನ್ನು ಗಮನಿಸಿ ಈ ಸೂಚನೆಗಳಿಗೆ ಅನುಸಾರವಾಗಿಯೇ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.

(6) ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹ ಅಭ್ಯರ್ಥಿಗಳ ವಿರುದ್ಧ ಆಯೋಗವು ಶಿಸ್ತು ಕ್ರಮ / ಕಾನೂನಿನನ್ವಯ ಸೂಕ್ತ ಕ್ರಮಕೈಗೊಳ್ಳುವುದು.

(7) ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ಶುಲ್ಕವನ್ನು ಸ್ಕ್ಯಾನರ್ ಸೌಲಭ್ಯವಿರುವ ಗಣಕೀಕೃತ ಅಂಚೆ ಕಛೇರಿಯ ರಾಜ್ಯದ ಯಾವುದೇ ಶಾಖೆಯಲ್ಲಿ ಅಂಚೆ ಕಛೇರಿಯ ವ್ಯವಹಾರದ ವೇಳೆಯಲ್ಲಿ ಸಂದಾಯ ಮಾಡಬಹುದಾಗಿದ್ದು, ಈ ಬಗ್ಗೆ ಆಯೋಗದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿರುವ 1713 ಅಂಚೆ ಕಛೇರಿ ಶಾಖೆಗಳ ಪಟ್ಟಿಯನ್ನು ನೋಡತಕ್ಕದ್ದು. ಈ ಅಂಚೆ ಕಛೇರಿಯ ಶಾಖೆಗಳನ್ನು ಹೊರತುಪಡಿಸಿ ಉಳಿದ ಶಾಖೆಗಳಲ್ಲಿ ಅಥವಾ ಇತರೆ ಯಾವುದೇ ರೀತಿಯಲ್ಲಿ ಶುಲ್ಕ ಸಂದಾಯ ಮಾಡಲಾಗುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(8) ನಿಗದಿಪಡಿಸಿದ ಕೊನೆಯ ದಿನಾಂಕದಂದು ಎದುರಾಗಬಹುದಾದ ಸಮಸ್ಯೆಗಳಿಂದ ಪಾರಾಗಲು ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ಕಾಯದೇ ಸಾಕಷ್ಟು ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸಲು ಪ್ರಯತ್ನಿಸತಕ್ಕದ್ದು. ಒಮ್ಮೆ ಅರ್ಜಿ ಶುಲ್ಕವನ್ನು

ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

(9) ಅಭ್ಯರ್ಥಿಯು ತನ್ನ ಹುದ್ದೆಗೆ ಸಂಬಂಧಿಸಿದಂತೆ 1974ರ ಕರ್ನಾಟಕ ನಾಗರಿಕ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು)ನಿಯಮಾವಳಿ ರೀತ್ಯಾ ಷೆಡ್ಯೂಲ್–IIರಲ್ಲಿ ಕಡ್ಡಾಯಗೊಳಿಸಿದ ವಿಷಯಗಳಿಗೆ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು ಹಾಗೂ ತನಗೆ ಸಂಬಂಧಪಡದ ಇತರೇ ಇಲಾಖೆಗಳ ವಿಷಯಗಳಲ್ಲಿ ಪರೀಕ್ಷೆ ಬರೆಯಲು ಅರ್ಜಿಯನ್ನು ಯಾವುದೇ ಕಾರಣಕ್ಕೂ ಸಲ್ಲಿಸತಕ್ಕದ್ದಲ್ಲ. ಹಾಗೆಯೇ ಅಭ್ಯರ್ಥಿಯು ತಾನು ಶುಲ್ಕ ಸಂದಾಯ ಮಾಡಿರುವೆನೆಂಬ ಮಾತ್ರಕ್ಕೆ ಪರೀಕ್ಷೆ ಬರೆಯಲು ಹಕ್ಕುಳ್ಳವನಾಗಿರುವೆನೆಂದು ಭಾವಿಸತಕ್ಕದ್ದಲ್ಲ.

(10) **ಎಸ್.ಎ.ಎಸ್. ವಿಷಯಗಳಿಗೆ ಸಂಬಂಧಿಸಿದಂತೆ ಸೂಚನೆ:** ಕರ್ನಾಟಕ ನಾಗರಿಕ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರಲ್ಲಿನ ಷೆಡ್ಯೂಲ್–IIರಲ್ಲಿ ಕಡ್ಡಾಯಗೊಳಿಸಿದ ನೌಕರರು ಮಾತ್ರ ಸಬಾರ್ಡಿನೇಟ್ ಅಕೌಂಟ್ಸ್ ಸರ್ವಿಸ್ (ಎಸ್.ಎ.ಎಸ್.) ವಿಷಯಗಳಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು. ಎಸ್.ಎ.ಎಸ್ ಪರೀಕ್ಷೆಗಳನ್ನು ತೆಗೆದುಕೊಳ್ಳಬೇಕಾಗುವ ನೌಕರರು ಪ್ರಥಮ ದರ್ಜೆ/ದ್ವಿತೀಯ ದರ್ಜೆ ಸಹಾಯಕರಾಗಿದ್ದಲ್ಲಿ ಅವರು ಸೇವೆಗೆ ನೇಮಕಗೊಂಡ ದಿನಾಂಕದಿಂದ ಪ್ರಥಮ ದರ್ಜೆ ಸಹಾಯಕರಾಗಿ ಮೂರು ವರ್ಷಗಳಿಗಿಂತ ಕಡಿಮೆ ಇರದ ಅಥವಾ ದ್ವಿತೀಯ ದರ್ಜೆ ಸಹಾಯಕರಾಗಿ ಆರು ವರ್ಷಗಳಿಗಿಂತ ಕಡಿಮೆ ಇರದ ಅವಧಿಯ ಸೇವೆ ಸಲ್ಲಿಸಿದ್ದು, ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗಿದ್ದಲ್ಲಿ ಮಾತ್ರ ಸದರಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಅಂತಹ ಅಭ್ಯರ್ಥಿಗಳು ಅವರ ಸೇವಾ ಅವಧಿಯನ್ನು ಮತ್ತು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ನಿಗದಿತ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು ಹಾಗೂ ಈ ಬಗ್ಗೆ ಅಧಿಸೂಚನೆಯ ಅನುಬಂಧ–'ಡಿ'ನಲ್ಲಿ ನೀಡಲಾಗಿರುವ ನಮೂನೆಯಲ್ಲಿ ತಮ್ಮ ಕಛೇರಿ ಮುಖ್ಯಸ್ಥರಿಂದ ಪ್ರಮಾಣಪತ್ರ ಪಡೆದು ಅಗತ್ಯ ದಾಖಲೆಗಳೊಂದಿಗೆ ದಿನಾಂಕ:**20–11–2014ರಂದು ಸಂಜೆ 5.00 ಗಂಟೆಯೊಳಗೆ** ಆಯೋಗದ ಕಛೇರಿಯಲ್ಲಿ ಸ್ವೀಕೃತವಾಗುವಂತೆ ಸಲ್ಲಿಸತಕ್ಕದ್ದು. ನಿಗದಿತ ದಿನಾಂಕದ ನಂತರ ಸ್ವೀಕೃತವಾಗುವ ಪ್ರಮಾಣಪತ್ರ ಮತ್ತು ಅನುಬಂಧ–'ಡಿ'ಯನ್ನು ಸಲ್ಲಿಸುವ ಅಭ್ಯರ್ಥಿಗಳ ಅರ್ಜಿಗಳನ್ನು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವಿಲ್ಲದೆ/ಸೂಚನೆಯನ್ನು ನೀಡದೆ ತಿರಸ್ಕರಿಸಲಾಗುವುದು.

(11) ಕೇಂದ್ರ ಪರಿಹಾರ ಸಮಿತಿಯು ಸರ್ಕಾರದ ಸ್ವಾಮ್ಯಕ್ಕೊಳಪಟ್ಟಿರುವ ಸಂಸ್ಥೆಯಾಗಿರುವ ಕಾರಣ ಅಲ್ಲಿಯ ಸಿಬ್ಬಂದಿ ವರ್ಗದವರು ಆಯೋಗವು ನಡೆಸುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್, ಅಕೌಂಟ್ಸ್ ಲೋಯರ್, ಜನರಲ್ ಲಾ ಇತ್ಯಾದಿ ಕಡ್ಡಾಯಗೊಳಿಸಲಾದ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

(12) ಸರ್ಕಾರವು ಇತರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಇಲಾಖಾ ಪರೀಕ್ಷೆಗಳನ್ನು ನಿಗದಿಪಡಿಸಿ ರಾಜ್ಯಪತ್ರದಲ್ಲಿ ಪ್ರಕಟಿಸಿದಲ್ಲಿ ಅಂತಹವರು ಪರೀಕ್ಷೆ ತೆಗೆದುಕೊಳ್ಳಲು ಅರ್ಹರಾಗುತ್ತಾರೆ.

1. **ಅಭ್ಯರ್ಥಿಗಳು ಆನ್‌ಲೈನ್(On-line) ಮುಖಾಂತರ ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅನುಸರಿಸಬೇಕಾದ ಹಂತಗಳನ್ನು ಅನುಕ್ರಮವಾಗಿ ಈ ಕೆಳಕಂಡಂತೆ ವಿವರಿಸಲಾಗಿದೆ.**

**ಹಂತ–1:** ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ **'http://kpsc.kar.nic.in'** ನ್ನು ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ **"ONLINE APPLICATION FOR DEPARTMENTAL EXAMS-SECOND SESSION 2014''** ಎಂದು ಮೂಡುತ್ತದೆ. ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಪರೀಕ್ಷೆಗಳಿಗೆ ಸಂಬಂಧಿಸಿದ ಅಧಿಸೂಚನೆಯನ್ನು ಮತ್ತು ಸೂಚನೆಗಳನ್ನು ಕಡ್ಡಾಯವಾಗಿ ಓದತಕ್ಕದ್ದು ಮತ್ತು ಅಂತಿಮವಾಗಿ ನಿಯಮ ಮತ್ತು ಷರತ್ತುಗಳನ್ನು ಕೆಳಗಿನ ಚೆಕ್ ಬಾಕ್ಸ್ ಅನ್ನು ಒತ್ತುವ ಮೂಲಕ ಒಪ್ಪಿಕೊಳ್ಳತಕ್ಕದ್ದು ಮತ್ತು **Open Application Button** ಅನ್ನು **Press** ಮಾಡಿ ಮುಂದುವರೆಯಬೇಕು.

**ಸೂಚನೆ:** ಅರ್ಜಿ ಭರ್ತಿ ಮಾಡುವ ಸಮಯದಲ್ಲಿ ಎದುರಾಗುವ ತಾಂತ್ರಿಕ ತೊಂದರೆಗಳಿಗೆ ಸಹಾಯವಾಣಿ ಸಂಖ್ಯೆ:**9901294490/9632320751** ಅನ್ನು ಸಂಪರ್ಕಿಸಿ ಮಾಹಿತಿ ಪಡೆದುಕೊಳ್ಳತಕ್ಕದ್ದು.

**ಹಂತ–2:** ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರವನ್ನು ಒಂದು ಸ್ವಚ್ಛವಾದ ಬಿಳಿ ಹಾಳೆಯ ಮೇಲೆ ಲಗತ್ತಿಸಿ ಅದರ ಕೆಳಗೆ ಕಪ್ಪು ಶಾಯಿಯ ಸ್ಕೆಚ್/ಮಾರ್ಕರ್ ಪೆನ್ನಿನಿಂದ ಸಹಿ ಮಾಡಿ (ಯಾವುದೇ ಕಾರಣಕ್ಕೂ ಭಾವ ಚಿತ್ರದ ಮೇಲೆ ಸಹಿ ಮಾಡಬಾರದು) ನಂತರ ಭಾವಚಿತ್ರ (Photo) ಮತ್ತು ಸಹಿಯನ್ನು ಒಳಗೊಂಡಂತೆ ಈ ಕೆಳಗಿನ ಅಳತೆ ಪ್ರಕಾರ ಸ್ಕ್ಯಾನ್ ಮಾಡಿ ಇಟ್ಟುಕೊಂಡಿರತಕ್ಕದ್ದು.

| ಪಾಸ್‌ಪೋರ್ಟ್ ಭಾವಚಿತ್ರ ಹಾಗೂ ಸಹಿ ಅಳತೆ |
|---|
| file size<100kb |
| DPI Setting = 100dpi |
| Image Scale =100% |
| color =True color |
| Type=JPEG/JPG |

**ಹಂತ–3:** ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ಅರ್ಜಿಯನ್ನು ಭರ್ತಿ ಮಾಡಿದ ನಂತರ ನಮೂದಿಸಿದ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಿಕೊಂಡು, ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಖಚಿತಪಡಿಸಿಕೊಂಡ ನಂತರ **Preview Button** ಅನ್ನು ಒತ್ತಿ ಮುಂದುವರೆಯಬೇಕು.

**ಹಂತ–4:** ನಿಮ್ಮ ಅರ್ಜಿಯ ಯಾವುದೇ ವಿವರಗಳ ಬದಲಾವಣೆ ಅಗತ್ಯವಿದ್ದರೆ ಪೂರ್ವ ದರ್ಶನದ(Preview) ಪುಟದಲ್ಲಿ **Edit Button** ಅನ್ನು ಒತ್ತಿ. ನಿಮ್ಮ ಅರ್ಜಿಯಲ್ಲಿನ ವಿವರಗಳು ಸರಿ ಇರುವುದನ್ನು ಖಚಿತಪಡಿಸಿಕೊಂಡು, ನೀವು ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಸಹಿಯೊಂದಿಗಿನ ಭಾವಚಿತ್ರವನ್ನು **upload** ಮಾಡಲು **Next Button** ಅನ್ನು ಒತ್ತಿ.

